ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಮೂಢ ನಂಬಿಕೆಯಿಂದ ಕೂಡಿದ ಬಾಲ್ಯ ವಿವಾಹಗಳು

ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) :-

478 (564) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಸಂಭವಿಸಿರುವ ಬಾಲ್ಯ ವಿವಾಹಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ನಿಗದಿಪಡಿಸಿರುವ ಸಮರ್ಥನೀಯ ಗುರಿಗಳನ್ನು ((Sustainable Goals) ತಲುಪಲು ರಾಜ್ಯ ಸರ್ಕಾರ ಬಾಲ್ಯ ವಿವಾಹ ಮತ್ತು ಬಲವಂತದ ವಿವಾಹಗಳನ್ನು ತಡೆಗಟ್ಟಲು ನಿರ್ವಹಿಸಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು)

( ಇ) ಇತ್ತೀಚಿನ ಕೊರೋನ ಸೋಂಕು ಪಿಡುಗುವಿನಿಂದ ಬಾಲ್ಯ ವಿವಾಹಗಳಲ್ಲಿ ಗಣನೀಯ ಏರಿಕೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು;

(ಈ) ಬಹುತೇಕ ಬಾಲ್ಯ ವಿವಾಹ ಪ್ರಕರಣಗಳಲ್ಲಿ ತಾಯಿ-ತಂದೆಯರ ಆರ್ಥಿಕ ದುರ್ಬಲತೆ ಮತ್ತು ಬಾಲಕಿಯರು ತಂದೆ-ತಾಯಿಗಳಿಗೆ ತಾವು ಭಾರವಾಗಬಾರದೆಂಬ ಭಾವನೆಗಳಿಂದ ಕೂಡಿದೆ ಎನ್ನುವ ಅಂಶಗಳು ಸರ್ಕಾರದ ಅರಿವಿಗೆ ಬಂದಿದೆಯೇ;

(ಉ) ರಾಜ್ಯದಲ್ಲಿ ಬಾಲ್ಯ ವಿವಾಹಗಳು, ಯಾವ ವರ್ಗ/ಸಮುದಾಯಗಳಲ್ಲಿ ಸಾಂಪ್ರದಾಯಿಕವಾಗಿ ಉಳಿದಿದೆ ಎಂದು ಗಣತಿ/ಸಮೀಕ್ಷೆಯಿಂದ ಸರ್ಕಾರದ ಗಮನಕ್ಕೆ ಬಂದಿದೆಯೇ? (ವಿವರ ನೀಡುವುದು)